1. ಪ್ರತಿ ಗುತ್ತಿಗೆದಾರರು ಟೆಂಡರ್‌ಗಿಟ್ಟ ಮೊತ್ತದ ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯಲ್ಲಿ ಮುಗಿಸಿರಬೇಕು. ಅಥವಾ ಗುತ್ತಿಗೆದಾರರು ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಒಂದೇ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು. ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರಗಳು ಇರತಕ್ಕದ್ದು. ಇಲ್ಲವಾದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.
2. ಆರ್ಥಿಕ ಸಾಮರ್ಥ್ಯದ ಸಾಕ್ಷಿಯು, ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಪ್ರಮಾಣದ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನ "ಲೈನ್ ಆಫ್ ಕ್ರೆಡಿಟ್ ಅನ್ನು" ಕಡ್ಡಾಯವಾಗಿ ತಾಂತ್ರಿಕ ಬಿಡ್‌ನಲ್ಲಿ ನಿಗದಿಪಡಿಸಿದ ಪ್ರೊಫಾರ್ಮಾದಲ್ಲಿ ಸಲ್ಲಿಸತಕ್ಕದ್ದು. "ಲೈನ್ ಆಫ್ ಕ್ರೆಡಿಟ್ ಅನ್ನು" ಸಲ್ಲಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.
3. ತಾಂತ್ರಿಕ ಬಿಡ್ ಜೊತೆಯಲ್ಲಿ ಲಗತ್ತಿಸುವ ಎಲ್ಲಾ ದಾಖಲಾತಿಗಳನ್ನು ಕಾರ್ಯಪಾಲಕ ಅಭಿಯಂತರವರಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಬಿಡ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.
4. ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ವಿವರಣೆಗಳನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಒದಗಿಸತಕ್ಕದ್ದು. ಕಂಪನಿಯ ವಿವರಗಳು : ಏಜೆನ್ಸಿಗಳು : ಸಂಸ್ಥೆಯ ಪ್ರೊಫೈಲ್ ಅನ್ನು ಲಗತ್ತಿಸತಕ್ಕದ್ದು.
5. ಜಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.
6. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.
7. ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.
8. ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಕಾರ್ಯಪಾಲಕ ಅಭಿಯಂತರು,
ಪಿ.ಆರ್. 789 ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ.

**ಆಯುಕ್ತರು ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು**

**ಟೆಂಡರ್ ಕಮ್ ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ:ಕೈವಾಇ/ಸ್ಟೋರ್ಸ್/2/2007–08, ದಿನಾಂಕ: 5ನೇ ಡಿಸೆಂಬರ್ 2007**

**ವಿಷಯ:** ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಅನುಪಯುಕ್ತ ವಾಹನಗಳಾದ ಕೆ.ಎ.01.ಜಿ.487 ಟೆಂಡರ್ ಕಮ್ ಬಹಿರಂಗ ಹರಾಜಿನಲ್ಲಿ ವಿಲೇ ಮಾಡುವ ಬಗ್ಗೆ.

**ಉಲ್ಲೇಖ:** ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 142 ಶಿಪಾನೀ 2000 ಬೆಂಗಳೂರು ದಿನಾಂಕ 5.1.2001.

ಈ ನಿರ್ದೇಶನಾಲಯದ ಹಳೆಯ ಅನುಪಯುಕ್ತ ವಾಹನ ಅಂಬಾಸಿಡರ್ ಸಂಖ್ಯೆ ಕೆ.ಎ.01.ಜಿ.487 ಮಾಡೆಲ್ 1991 ಅನ್ನು ದಿನಾಂಕ 28.12.2007 ರಂದು ಬೆಳಿಗ್ಗೆ 12.00 ಗಂಟೆಗೆ ಸರಿಯಾಗಿ ಆಯುಕ್ತರು ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ನಂ.49, ಖನಿಜ ಭವನ, ದೇವರಾಜ ಅರಸು ರಸ್ತೆ, (ರೇಸ್ ಕೋರ್ಸ್ ರಸ್ತೆ), ಬೆಂಗಳೂರು–1 ಇಲ್ಲಿಯ ಆವರಣದಲ್ಲಿ ಟೆಂಡರ್ ಕಮ್ ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡಲಾಗುವುದು. ವಾಹನವನ್ನು ಹರಾಜು ಮೂಲಕ ಕೊಳ್ಳಲು ಇಚ್ಛಿಸುವ ಸಾರ್ವಜನಿಕರು ಸದರಿ ದಿನದಂದು ಟೆಂಡರ್ ಕಮ್ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಕೋರಲಾಗಿದ್ದು, ಸದರಿ ಹರಾಜು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟಿರುತ್ತದೆಂದು ತಿಳಿಸಲಾಗಿದೆ.

1. ವಾಹನವನ್ನು ಟೆಂಡರ್ ಕಮ್ ಬಹಿರಂಗ ಹರಾಜು ಮೂಲಕ ಎಲ್ಲಿ ಹೇಗಿದೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು.
2. ಹರಾಜಿನಲ್ಲಿ ಭಾಗವಹಿಸುವ ಸಾರ್ವಜನಿಕರು ರೂ.3000–00 (ರೂಪಾಯಿ ಮೂರು ಸಾವಿರ) ಅನ್ನು ಈ ಇಲಾಖೆಗೆ ಪಾವತಿ ಮಾಡಿ ಸೂಕ್ತ ರಶೀದಿಯನ್ನು ಪಡೆದ ನಂತರವೇ ಹರಾಜಿನಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದು.
3. ಮುಂಗಡವಾಗಿ ಪಾವತಿ ಮಾಡಲಾದ ಹಣವನ್ನು ಅನುತೀರ್ಣ ಹರಾಜುದಾರರಿಗೆ ಸ್ಥಳದಲ್ಲಿಯೇ ಹಿಂತಿರುಗಿಸಲಾಗುವುದು.
4. ಟೆಂಡರ್ ಕಮ್ ಬಹಿರಂಗ ಹರಾಜಿನಲ್ಲಿ ಜಯಶೀಲರಾದ ಹರಾಜುದಾರರು, ಹರಾಜಿನ ಮೌಲ್ಯದ ಶೇಕಡಾ 25 ರಷ್ಟು ಹಣವನ್ನು ಪಾವತಿ ಮಾಡತಕ್ಕದ್ದು. ಈ ಮೊತ್ತಕ್ಕೆ ಹರಾಜಿನ ಪೂರ್ವದಲ್ಲಿ ನೀಡಲಾಗಿರುವ ರೂ. 3000/– ಅನ್ನು ಪರಿಗಣಿಸಲಾಗುವುದು.

5. ಉಳಿದ ಶೇಕಡಾ 75 ರಷ್ಟು ಭಾಗದ ಪೂರ್ಣ ಹಣವನ್ನು ಆಯುಕ್ತರು ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ರವರು ಹರಾಜನ್ನು ಅನುಮೋದಿಸಿ, ಸ್ಥಿರಪಡಿಸಿದ ತಿಳುವಳಿಕೆಯನ್ನು ಜಯಶೀಲರಾದ ಹರಾಜುದಾರರಿಗೆ ತಿಳಿಸಿದ 15 ದಿವಸಗಳೊಳಗಾಗಿ ಈ ಇಲಾಖೆಗೆ ಪಾವತಿ ಮಾಡತಕ್ಕದ್ದು. ಒಂದು ವೇಳೆ ತಪ್ಪಿದಲ್ಲಿ ಮೊದಲು ಪಾವತಿಸಿದ ಹಣವನ್ನು ಎಂದರೆ ಹರಾಜು ಮೌಲ್ಯದ ಶೇಕಡಾ 25 ಭಾಗದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಲ್ಲದೆ, ಸದರಿ ಹರಾಜನ್ನು ರದ್ದು ಮಾಡಿದಂತೆ ಪರಿಗಣಿಸಲಾಗುವುದು.
6. ವಾಹನವನ್ನು ಪರಿಶೀಲಿಸಲು ಇಚ್ಚಿಸುವ ಸಾರ್ವಜನಿಕರು ವಾಹನ ತಂಗಿರುವ ಸ್ಥಳದಲ್ಲಿ ಕಚೇರಿ ನಡೆಯುವ ದಿನದಂದು ಕಚೇರಿಯ ವೇಳೆಯಲ್ಲಿ ಸಹಾಯಕ ನಿರ್ದೇಶಕರು (ವಾರ್ತಾ ವಿಭಾಗ), ಕೇಂದ್ರ ಕಛೇರಿ, ಇವರನ್ನು ಭೇಟಿ ಮಾಡಿ ವಾಹನವನ್ನು ಪರಿಶೀಲಿಸಬಹುದು.
7. ಮಾರಾಟ ತೆರಿಗೆ ಸರ್‌ಚಾರ್ಜು ಹಣವನ್ನು ತತ್ಸಂಬಂಧವಾದ ಸರ್ಕಾರದ ಆದೇಶದ ಅನುಸಾರ ಹರಾಜಿನ ಮೌಲ್ಯದ ಹೆಚ್ಚಿನ ಬಿಡ್ ಹಣದ ಮೇಲೆ ಚಾರ್ಜು ಮಾಡಲಾಗುವುದು.
8. ವಾಹನದ ದಾಖಲಾತಿ ಪತ್ರಗಳನ್ನು ಈ ಇಲಾಖೆಯಲ್ಲಿ ಲಭ್ಯವಿರುವಂತೆ ಜಯಶೀಲರಾದ ಹರಾಜುದಾರರಿಗೆ ನೀಡಲಾಗುವುದು. ಲಭ್ಯವಿಲ್ಲದ ದಾಖಲಾತಿ ಪತ್ರಗಳ ಬಗ್ಗೆ ಸೂಕ್ತ ಹಿಂಬರಹವನ್ನು ನೀಡಲಾಗುವುದು.
9. ಈ ಟೆಂಡರ್ ಕಮ್ ಬಹಿರಂಗ ಹರಾಜಿನ ಅಂತಿಮ ತೀರ್ಮಾನವು ಆಯುಕ್ತರು ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ನಿರ್ಧಾರಕ್ಕೆ ಒಳಪಟ್ಟಿದ್ದು, ಸದರಿ ತೀರ್ಮಾನವನ್ನು ಯಾವ ನ್ಯಾಯಾಲಯದಲ್ಲಿಯೂ ಆಕ್ಷೇಪಿಸುವಂತಿಲ್ಲ ಹಾಗೂ ಸದರಿ ತೀರ್ಮಾನದ ವಿರುದ್ಧ ಸ್ಪರ್ಧಿಸುವಂತಿಲ್ಲವೆಂದು ತಿಳಿಯುವುದು.

ಪಿ.ಆರ್. 768 ನಿರ್ದೇಶಕರ ಪರವಾಗಿ

**ಆಯುಕ್ತರು ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು**

**ಟೆಂಡರ್ ಕಮ್ ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ:ಕೈವಾಇ/ಸ್ಟೋರ್ಸ್/95/2007–08, ದಿನಾಂಕ: 5ನೇ ಡಿಸೆಂಬರ್ 2007**

**ವಿಷಯ:** ಈ ನಿರ್ದೇಶನಾಲಯದ ಅನುಪಯುಕ್ತ ಹಳೆಯ ಕನ್ನಡ, ಆಂಗ್ಲ ಬೆರಳಚ್ಚು ಯಂತ್ರಗಳು ಮತ್ತು ದ್ವಿಪ್ರತಿ ಯಂತ್ರಗಳನ್ನು ಟೆಂಡರ್ ಕಮ್ ಬಹಿರಂಗ ಹರಾಜಿನಲ್ಲಿ ವಿಲೇ ಮಾಡುವ ಬಗ್ಗೆ.

**ಉಲ್ಲೇಖ:** 1. ಬೆರಳಚ್ಚು ಯಂತ್ರಗಳ ಮತ್ತು ದ್ವಿಪ್ರತಿ ಯಂತ್ರಗಳ ಹರಾಜಿನ ಸಮಿತಿಯ ಆದೇಶದ ದಿನಾಂಕ 21.8.2006 ರಂತೆ.

2. ಪತ್ರ ಸಂಖ್ಯೆ ಎಸ್‌ಟಿವೈ 490 06–07 ದಿನಾಂಕ 15.3.07.

ಈ ನಿರ್ದೇಶನಾಲಯದ ಅನುಪಯುಕ್ತ ಹಳೆಯ ಕನ್ನಡ, ಆಂಗ್ಲ ದ್ವಿಪ್ರತಿ ಯಂತ್ರಗಳನ್ನು (ಬೆರಳಚ್ಚು ಯಂತ್ರಗಳು–19 ಮತ್ತು ದ್ವಿಪ್ರತಿ ಯಂತ್ರಗಳು–2) ಒಂದೇ ಲಾಟಿನಲ್ಲಿ ದಿನಾಂಕ 28.12.07 ರಂದು ಬೆಳಿಗ್ಗೆ 12.00 ಗಂಟೆಗೆ ಟೆಂಡರ್ ಕಮ್ ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲಾಗುವುದು.

1. ಅನುಪಯುಕ್ತ ಹಳೆಯ ಕನ್ನಡ, ಆಂಗ್ಲ ಬೆರಳಚ್ಚು ಯಂತ್ರಗಳು ಮತ್ತು ದ್ವಿಪ್ರತಿ ಯಂತ್ರಗಳನ್ನು ಟೆಂಡರ್ ಕಮ್ ಬಹಿರಂಗ ಹರಾಜು ಮೂಲಕ ಎಲ್ಲಿ ಹೇಗಿದೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು.
2. ಹರಾಜಿನಲ್ಲಿ ಭಾಗವಹಿಸುವ ಬಿಡ್‌ದಾರರು ರೂ.3000–00 (ರೂಪಾಯಿ ಮೂರು ಸಾವಿರ) ಇ.ಎಂ.ಡಿ. ಹಣವನ್ನು ಇಲಾಖೆಗೆ ಪಾವತಿ ಮಾಡಿ ಸೂಕ್ತ ರಶೀದಿಯನ್ನು ಪಡೆದ ನಂತರವೇ ಹರಾಜಿನಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದು.
3. ಟೆಂಡರ್ ಕಮ್ ಬಹಿರಂಗ ಹರಾಜಿನಲ್ಲಿ ಯಾವುದು ಅತೀ ಹೆಚ್ಚು ಮೊತ್ತ ಇರುತ್ತದೆಯೋ ಆ ಮೊಬಲಗನ್ನು ಗಣನೆಗೆ ತೆಗೆದುಕೊಳ್ಳಲಾಗುವುದು. ಮತ್ತು ಬಿಡ್‌ದಾರರು ಮೂರು ದಿವಸಗಳಲ್ಲಿ ಹಣವನ್ನು ಪಾವತಿ ಮಾಡಿ ಯಂತ್ರಗಳನ್ನು ತೆಗೆದುಕೊಂಡು ಹೋಗತಕ್ಕದ್ದು.
4. ಟೆಂಡರ್ ಕಮ್ ಬಹಿರಂಗ ಹರಾಜಿನ ಅಂತಿಮ ತೀರ್ಮಾನವು ಆಯುಕ್ತರು ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ನಿರ್ಧಾರಕ್ಕೆ ಒಳಪಟ್ಟಿದ್ದು.
5. ಸದರಿ ಯಂತ್ರಗಳನ್ನು ಕಛೇರಿ ನಡೆಯುವ ದಿನದಂದು ಕಛೇರಿ ವೇಳೆಯಲ್ಲಿ ಸಹಾಯಕ ನಿರ್ದೇಶಕರು (ವಾರ್ತಾ ವಿಭಾಗ) ಕೇಂದ್ರ ಕಛೇರಿ ಇವರನ್ನು ಭೇಟಿ ಮಾಡಿ ಖುದ್ದಾಗಿ ಪರಿಶೀಲಿಸಬಹುದು.

ಪಿ.ಆರ್. 769 ನಿರ್ದೇಶಕರ ಪರವಾಗಿ

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ, ಕಲ್ಕೆರೆ, ಬೆಂಗಳೂರು – 83
## ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ಸಂಖ್ಯೆ: ಎ1/ಬರಾಉ/ಸಿಆರ್–10/2007–08, ದಿನಾಂಕ: 8ನೇ ಡಿಸೆಂಬರ್ 2007**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2007–08ನೇ ಸಾಲಿನಲ್ಲಿ ಈ ಕೆಳಗೆ ಷೆಡ್ಯೂಲ್‌ನಲ್ಲಿ ನಮೂದಿಸಿರುವ ವಿವಿಧ ಕೆಲಸಗಳಿಗೆ, ಈ ವಿಭಾಗದ ನೊಂದಾಯಿತ ಅರಣ್ಯ ಗುತ್ತಿಗೆದಾರರಿಂದ ಟೆಂಡರ್ ಕರೆಯಲಾಗಿದೆ. ಇಚ್ಛೆ ಉಳ್ಳವರು ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು ಈ ಕೆಳಗೆ ಸಹಿ ಮಾಡಿರುವವರ ಕಛೇರಿಯಲ್ಲಿ ದಿನಾಂಕ: 04/01/2008 ರಂದು ಮಧ್ಯಾಹ್ನ 3.00 ಗಂಟೆಯವರೆಗೆ ಸಲ್ಲಿಸಬಹುದಾಗಿರುತ್ತದೆ.

**ಷೆಡ್ಯೂಲ್**

| ಯೂನಿಟ್ ಸಂಖ್ಯೆ | ಕೆಲಸದ ವಿವರ | ಟೆಂಡರಿಗೆ ಇಡಲಾದ ಅಂದಾಜು ಮೊತ್ತ | ಭೌತಿಕ ಪರಿಮಾಣ | ಟೆಂಡರಿಗೆ ನಿಗಧಿಪಡಿಸಿದ ಇ.ಎಂ.ಟಿ. ಮೊತ್ತ (ರೂ. ಗಳಲ್ಲಿ) | ಕೆಲಸ ಮುಕ್ತಾಯಗೊಳಿಸುವ ದಿನಾಂಕ |
|---|---|---|---|---|---|
| 1. | ಬನ್ನೇರುಘಟ್ಟ ವನ್ಯಜೀವಿ ವಲಯದ ವ್ಯಾಪ್ತಿಯ ಕಲ್ಕೆರೆ ಪ್ರದೇಶದಲ್ಲಿ ಸಿಬ್ಬಂದಿಯ ಜೋಡಿ ಗೃಹ ನಿರ್ಮಾಣ ಮಾಡುವುದು. | 14.00 ಲಕ್ಷ | 1 | 35000 | 15.03.2008 |
| 2. | ಬನ್ನೇರುಘಟ್ಟ ವನ್ಯಜೀವಿ ವಲಯದ ತಾಳೆ (ರಾಗಿಹಳ್ಳಿ ಬೀಟ್) ಅರಣ್ಯ ಪ್ರದೇಶದಲ್ಲಿ ವೀಕ್ಷಣಾ ಗೋಪುರ (Watch Tower) ನಿರ್ಮಾಣ | 2.00 ಲಕ್ಷ | 1 | 5000 | 31.01.2008 |
| 3. | ಬನ್ನೇರುಘಟ್ಟ ವನ್ಯಜೀವಿ ವಲಯದ ದೊಡ್ಡಣ್ಣನಕೆರೆಯಿಂದ ಮುನಿನಗರ ಕೆರೆಯವರೆಗೆ ಸೋಲಾರ್ ತಂತಿಬೇಲಿ ನಿರ್ಮಾಣ ಮಾಡುವುದು. | 6.40 ಲಕ್ಷ | 3.20 ಕಿ.ಮೀ. | 15000 | 31.01.2008 |
| 4. | ಬನ್ನೇರುಘಟ್ಟ ವನ್ಯಜೀವಿ ವಲಯದಲ್ಲಿ ಕೆಸವಿನ ಕುಂಟೆ ಪ್ರದೇಶದಲ್ಲಿ ಎಸ್.ಎಸ್.ಎಂ. (Size Stone Masonry) ಗೋಡೆಯನ್ನು ವೆಂಟ್ಸ್ /ಪೋಲ್ಸ್ & ಸ್ಪೈಕ್ ಜೊತೆಗೆ ಕಟ್ಟುವುದು. | 1.25 ಲಕ್ಷ | 1 | 3500 | 31.01.2008 |
| 5. | ಹಾರೋಹಳ್ಳಿ ವನ್ಯಜೀವಿ ವಲಯದಲ್ಲಿ ಗೊಟ್ಟಿಗೆಹಳ್ಳಿ ಪ್ರದೇಶದಲ್ಲಿ ಎಸ್.ಎಸ್.ಎಂ. (Size Stone Masonry) ಗೋಡೆಯನ್ನು ವೆಂಟ್ಸ್ / ಪೋಲ್ಸ್ & ಸ್ಪೈಕ್ ಜೊತೆಗೆ ಕಟ್ಟುವುದು. | 1.25 ಲಕ್ಷ | 1 | 3500 | 31.01.2008 |
| 6. | ಆನೇಕಲ್ ವನ್ಯಜೀವಿ ವಲಯದಲ್ಲಿ ಮಲ್ಲಿಗೆಕಲ್ಲು ಪ್ರದೇಶದಲ್ಲಿ ಎಸ್.ಎಸ್.ಎಂ. (Size Stone Masonry) ಗೋಡೆಯನ್ನು ವೆಂಟ್ಸ್ / ಪೋಲ್ಸ್ & ಸ್ಪೈಕ್ ಜೊತೆಗೆ ಕಟ್ಟುವುದು. | 1.25 ಲಕ್ಷ | 1 | 3500 | 31.01.2008 |
| 7. | ಬನ್ನೇರುಘಟ್ಟ ವನ್ಯಜೀವಿ ವಲಯದ ರಾಮಸ್ವಾಮಿ ಹಳ್ಳದಲ್ಲಿ ಕೆರೆ ನಿರ್ಮಾಣ | 2.50 ಲಕ್ಷ | 1 | 6500 | 01.03.2008 |

**ಷರತ್ತುಗಳು:**

1. ಟೆಂಡರು ಫಾರಂನ್ನು ಪ್ರತಿ ಫಾರಂಗೆ ರೂ. 100/– (ತೆರಿಗೆ ಸೇರಿ) ರಂತೆ ಪಾವತಿ ಮಾಡಿ ದಿನಾಂಕ: 02/01/2008 & 03/01/2008 ರವರೆಗೆ, ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು ಮತ್ತು ಇಚ್ಛೆ ಉಳ್ಳವರು ಈ ವಿಭಾಗದಲ್ಲಿ 2007–08ನೇ ಸಾಲಿಗೆ ತಮ್ಮ ಹೆಸರನ್ನು ನೊಂದಾಯಿಸಿಕೊಂಡಿರಬೇಕು.
2. ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್. 785 ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ, ಬೆಂಗಳೂರು.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ದಾವಣಗೆರೆ ವಿಭಾಗ, ದಾವಣಗೆರೆ ಇವರ ಕಾರ್ಯಾಲಯ
## ವಿವರವಾದ ಟೆಂಡರ್ ಪ್ರಕಟಣೆ

**ಸಂ. ಬಿ1/ಬಿಯುಡಿ–ಟೆಂಡರ್/ಸಿಆರ್–70/07–08, ದಿನಾಂಕ: 11ನೇ ಡಿಸೆಂಬರ್ 2007**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2007–08ನೇ ಸಾಲಿನಲ್ಲಿ ದಾವಣಗೆರೆ ವಿಭಾಗದಲ್ಲಿ ಈ ಕೆಳಗೆ ಕಾಣಿಸಿದ ಷೆಡ್ಯೂಲ್‌ನಲ್ಲಿ ನಮೂದಿಸಿದಂತೆ ಗುಂಡಿಗಳನ್ನು ತೆಗೆಯಲು, 2007–08ನೇ ಸಾಲಿಗೆ ಈ ವಿಭಾಗದಲ್ಲಿ ನೊಂದಾಯಿತರಾದ ಅರಣ್ಯ ಗುತ್ತಿಗೆದಾರರಿಂದ ನಿಗಧಿತ ನಮೂನೆಯಲ್ಲಿ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಇಚ್ಛೆಯುಳ್ಳವರು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟಂತೆ ಟೆಂಡರ್‌ನಲ್ಲಿ ಭಾಗವಹಿಸಬಹುದಾಗಿದೆ.

## ಷೆಡ್ಯೂಲ್ – 1

| | | | |
|---|---|---|---|
| 1 | ಟೆಂಡರ್ ಜರುಗುವ ಸ್ಥಳ | : | ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಲೋಕಿಕೆರೆ ರಸ್ತೆ, ಟಿ.ವಿ. ಸ್ಟೇಷನ್ ಹತ್ತಿರ, ದಾವಣಗೆರೆ. |
| 2 | ಟೆಂಡರ್ ಫಾರಂಗಳನ್ನು ನೀಡುವ ದಿನಾಂಕ | : | ದಿನಾಂಕ: 5.1.2008 ರಂದು ಬೆಳಿಗ್ಗೆ 10–00 ಗಂಟೆಯಿಂದ ಮಧ್ಯಾಹ್ನ 1–00 ಗಂಟೆಯವರೆಗೆ |
| 3 | ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ ಮತ್ತು ಸಮಯ | : | ದಿನಾಂಕ: 5.1.2008 ರಂದು ಮಧ್ಯಾಹ್ನ 4–30 ಗಂಟೆಯವರೆಗೆ |
| 4 | ಟೆಂಡರ್‌ಗಳನ್ನು ತೆರೆಯುವ ಸಮಯ | : | ದಿನಾಂಕ:5.1.2008 ರಂದು ಮಧ್ಯಾಹ್ನ 4–45 ಗಂಟೆಗೆ |
| 5 | ಟೆಂಡರ್ ಫಾರಂ ದರ | : | ರೂ. 220/– |
| 6 | ಅರಣ್ಯ ಗುತ್ತಿಗೆದಾರನಾಗಿ ನೊಂದಣಿ ಮಾಡಿಸಲು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ: | : | 4–1–2008 |

## ಷೆಡ್ಯೂಲ್ – 2

### ಯುನಿಟ್ – 5

(ಪ್ರಮಾಣ ಸಂಖ್ಯೆಗಳಲ್ಲಿ) (ಮೊತ್ತ ರೂ. ಗಳಲ್ಲಿ)

| ಕ್ರ. ಸಂ. | ಯೋಜನೆ | ವಲಯ | ಕಾಮಗಾರಿ ವಿವರ | ಅಂದಾಜು ಪ್ರಮಾಣ | ಅಂದಾಜು ಮೊತ್ತ | ಇ.ಎಂ.ಡಿ. |
|---|---|---|---|---|---|---|
| 1<br>2 | ಕೆ.ಎಸ್.ಎಫ್.ಎಂ.ಬಿ.ಸಿ., | ಹರಪನಹಳ್ಳಿ | ಮಾನವ ನಿರ್ಮಿತ 1.00 x 1.00 x 1.00 ಮೀ. ಅಳತೆಯ ಗುಂಡಿಗಳನ್ನು ತೆಗೆಯುವುದು. | 10000 | 466500 | 9330 |

### ಯುನಿಟ್ – 6

| ಕ್ರ. ಸಂ. | ಯೋಜನೆ | ವಲಯ | ಕಾಮಗಾರಿ ವಿವರ | ಅಂದಾಜು ಪ್ರಮಾಣ | ಅಂದಾಜು ಮೊತ್ತ | ಇ.ಎಂ.ಡಿ. |
|---|---|---|---|---|---|---|
| 1<br>2 | ಕೆ.ಎಸ್.ಎಫ್.ಎಂ.ಬಿ.ಸಿ., | ಜಗಳೂರು | ಮಾನವ ನಿರ್ಮಿತ 1.00 x 1.00 x 1.00 ಮೀ. ಅಳತೆಯ ಗುಂಡಿಗಳನ್ನು ತೆಗೆಯುವುದು. | 7500 | 349875 | 7000 |

ನಿಬಂಧನೆಗಳು:–

1. ಟೆಂಡರ್‌ನಲ್ಲಿ ಭಾಗವಹಿಸುವ ಗುತ್ತಿಗೆದಾರರು 2007–08ನೇ ಸಾಲಿಗೆ ಈ ವಿಭಾಗದಲ್ಲಿ ನೊಂದಾಯಿತ ಗುತ್ತಿಗೆದಾರರಾಗಿರತಕ್ಕದ್ದು.
2. ಟೆಂಡರ್ ದಿನಾಂಕ: 5.1.2008 ರಂದು ಬೆಳಿಗ್ಗೆ 10–00 ಗಂಟೆಯಿಂದ ಮಧ್ಯಾಹ್ನ 1–00 ಗಂಟೆಯವರೆಗೆ ಟೆಂಡರ್ ನಮೂನೆಯನ್ನು ಶುಲ್ಕ ರೂ.220/– ಗಳನ್ನು ಪಾವತಿಸಿ ಪಡೆಯತಕ್ಕದ್ದು.
3. ಟೆಂಡರ್ ನಮೂನೆಯನ್ನು ನಿಗಧಿತ ಇ.ಎಂ.ಡಿ. ಯೊಂದಿಗೆ ಪೂರ್ಣ ಪ್ರಮಾಣದಲ್ಲಿ ಭರ್ತಿ ಮಾಡಿ ಈ ಕಛೇರಿಯಲ್ಲಿನ ಟೆಂಡರ್ ಪೆಟ್ಟಿಗೆಯಲ್ಲಿ ಟೆಂಡರ್ ದಿವಸದಂದೇ 4–30 ರೊಳಗಾಗಿ ಹಾಕತಕ್ಕದ್ದು.
4. ದರಗಳನ್ನು ಇಲಾಖಾ ಎಸ್.ಎಸ್.ಆರ್. ದರಗಳಿಗಿಂತ ಶೇಕಡವಾರು ಇಂತಿಷ್ಟು ಹೆಚ್ಚು ಅಥವಾ ಶೇಕಡವಾರು ಇಂತಿಷ್ಟು ಕಡಿಮೆ ಎಂದು ಸ್ಪಷ್ಟವಾಗಿ ನಮೂದಿಸತಕ್ಕದ್ದು.
5. ಕಾಮಗಾರಿಗಳನ್ನು ಸಮರ್ಪಕವಾಗಿ ಪೂರ್ಣಗೊಳಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿಗಳು, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಅಥವಾ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರಿಂದ ತಪಾಸಣೆಯನ್ನು ಕಡ್ಡಾಯವಾಗಿ ಮಾಡಿಸತಕ್ಕದ್ದು.
6. ಆಯಾಯ ಯೋಜನೆಯಡಿಯಲ್ಲಿನ ಕಾಮಗಾರಿಗಳನ್ನು ನಿಗಧಿತ ಅವಧಿಯೊಳಗೆ ಅಂದರೆ (8–02–2008) ಪೂರ್ಣಗೊಳಿಸತಕ್ಕದ್ದು ಮತ್ತು ಹಣ ಪಾವತಿಗೆ ಆಯಾಯ ಶೀರ್ಷಿಕೆಯಡಿ ಹಣ ಬಿಡುಗಡೆಯಾದ ನಂತರವೇ ಈ ಕಛೇರಿಯಿಂದ ಪಾವತಿಸಲು ಕ್ರಮ ಕೈಗೊಳ್ಳಲಾಗುವುದು.
7. ನಿಗಧಿತ ಸಮಯದೊಳಗಾಗಿ ಕಾಮಗಾರಿಗಳನ್ನು ಪೂರ್ಣಗೊಳಿಸದೇ ಇದ್ದಲ್ಲಿ ಭದ್ರತಾ ಠೇವಣಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ಕಾಮಗಾರಿಗಳನ್ನು ಮರು ಟೆಂಡರ್ ಮೂಲಕ ಅಥವಾ ಗುತ್ತಿಗೆ ಆಧಾರದ ಮೇಲೆ ಮಾಡಿಸಲಾಗುವುದು. ಒಂದೊಮ್ಮೆ ವೆಚ್ಚವು ಮಂಜೂರಾದ ಮೊತ್ತಕ್ಕಿಂತ ಹೆಚ್ಚಿಗೆ ಆದಲ್ಲಿ ಮೂಲ ಟೆಂಡರ್‌ದಾರರಿಂದ ವಸೂಲಿ ಮಾಡಲಾಗುವುದು. ಉಳಿಕೆ ಆದಲ್ಲಿ ಟೆಂಡರ್‌ದಾರರು ಉಳಿಕೆ ಹಣಕ್ಕೆ ಬಾದ್ಯಸ್ಥರಾಗಿರುವುದಿಲ್ಲ.
8. ಯಶಸ್ವಿ ಟೆಂಡರ್‌ದಾರರು ಕಾಮಗಾರಿ ಪ್ರಾರಂಭಿಸುವ ಮುನ್ನ ಈ ಕಛೇರಿಯಲ್ಲಿ ಭದ್ರತಾ ಠೇವಣಿಯನ್ನು ಜಮಾ ಮಾಡಿ ಟೆಂಡರ್ ಕರಾರು ಒಪ್ಪಂದ ಮಾಡಿಕೊಂಡು ಕಾರ್ಯದೇಶ ಪಡೆದು ಕಾಮಗಾರಿ ಪ್ರಾರಂಭಿಸತಕ್ಕದ್ದು.

9. ಇ.ಎಂ.ಡಿ. ಮೊತ್ತವನ್ನು (ಭದ್ರತಾ ಠೇವಣಿಯನ್ನು) ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ದಾವಣಗೆರೆ ವಿಭಾಗ, ದಾವಣಗೆರೆ (Deputy Conservator of Forests, Davanagere Division) ಇವರ ಪದನಾಮಕ್ಕೆ ತೆಗೆಯಿಸಿ ದಾವಣಗೆರೆಯಲ್ಲಿ ಪಾವತಿಯಾಗುವಂತೆ ಇರತಕ್ಕದ್ದು.
10. ಷೆಡ್ಯೂಲ್‌ನಲ್ಲಿ ತಿಳಿಸಿರುವ ಪ್ರಮಾಣಗಳು ಅಂದಾಜು ಪ್ರಮಾಣಗಳಾಗಿದ್ದು ಹೆಚ್ಚು ಅಥವಾ ಕಡಿಮೆಯಾಗುವ ಸಾಧ್ಯತೆಗಳಿದ್ದು ಇದಕ್ಕೆ ಬದ್ಧರಾಗಿರತಕ್ಕದ್ದು.
11. ಇನ್ನೂ ವಿವರವಾದ ಷರತ್ತುಗಳಿಗಾಗಿ / ಹೆಚ್ಚಿನ ವಿವರಗಳಿಗಾಗಿ ಈ ಕಾರ್ಯಾಲಯದಲ್ಲಿ ಕೆಲಸದ ದಿವಸಗಳಲ್ಲಿ ಕಛೇರಿಯ ವೇಳೆಯಲ್ಲಿ ಸಂಪರ್ಕಿಸತಕ್ಕದ್ದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ದಾವಣಗೆರೆ ವಿಭಾಗ, ದಾವಣಗೆರೆ.

ಪಿ.ಆರ್. 790

## ತೋಟಗಾರಿಕೆ ಇಲಾಖೆ
## ತೋಟಗಾರಿಕೆ ನಿರ್ದೇಶನಾಲಯ ಲಾಲ್‌ಬಾಗ್, ಬೆಂಗಳೂರು

**ಸಂ:ತೋಇ/ತೋಅನಿ/ತಾಬೆ/ಸತೋಅ1/27/2007–08, ದಿನಾಂಕ: 19ನೇ ಡಿಸೆಂಬರ್ 2007**

**ಕಬಿನಿ ಸಂಸ್ಕರಣಾ ಘಟಕದಲ್ಲಿ ತಾಳೆ ಹಣ್ಣನ್ನು ಸಂಸ್ಕರಿಸಲು ಟೆಂಡರ್ ಪ್ರಕಟಣೆ**

ಮೈಸೂರು ಜಿಲ್ಲೆ, ಹೆಚ್.ಡಿ. ಕೋಟೆ ತಾಲ್ಲೂಕಿನ ಕಬಿನಿ ತೋಟಗಾರಿಕೆ ಕ್ಷೇತ್ರದಲ್ಲಿ ತಾಳೆ ಸಂಸ್ಕರಣಾ ಘಟಕವನ್ನು 1998ರಲ್ಲಿ ಸ್ಥಾಪಿಸಲಾಗಿದ್ದು, ಸದರಿ ಸಂಸ್ಕರಣಾ ಘಟಕದಲ್ಲಿ 1.2.2008ರಿಂದ ತಾಳೆ ಹಣ್ಣುಗಳನ್ನು ಸಂಸ್ಕರಿಸಲು ತಾಳೆಬೆಳೆ ಅಭಿವೃದ್ಧಿಯಲ್ಲಿ ತೊಡಗಿರುವ ಆಸಕ್ತ ಕಂಪನಿಗಳಿಂದ ಟೆಂಡರ್ ಆಹ್ವಾನಿಸಲಾಗಿದೆ. ನಿಗದಿತ ಟೆಂಡರ್ ಡಾಕ್ಯುಮೆಂಟ್ ಅನ್ನು ತೋಟಗಾರಿಕೆ ಅಪರ ನಿರ್ದೇಶಕರು, ತಾಳೆಬೆಳೆ, ಲಾಲ್‌ಬಾಗ್, ಬೆಂಗಳೂರುರವರ ಕಚೇರಿಯಲ್ಲಿ ರೂ.200/–ಗಳನ್ನು ನಗದಾಗಿ ನೀಡಿ ದಿನಾಂಕ 1.1.2008 ರಿಂದ 5.1.2008 ರವರೆಗೆ ಬೆಳಗ್ಗೆ 10.30 ರಿಂದ ಸಂಜೆ 4.30 ರ ಅವಧಿಯಲ್ಲಿ ಪಡೆಯಬಹುದು. ಮೊಹರಾದ ಲಕೋಟೆಯನ್ನು ಹಿಂದಿರುಗಿಸಲು ಕೊನೆಯ ದಿನಾಂಕ 14.1.2008 ವೇಳೆ ಸಂಜೆ 5.00 ಗಂಟೆಯೊಳಗೆ ಟೆಂಡರ್‌ದಾರರು ನಿಗದಿತ ಟೆಂಡರ್ ಡಾಕ್ಯುಮೆಂಟ್ ಜೊತೆಗೆ ರೂ.2.5 ಲಕ್ಷಗಳ ಮೊತ್ತದ ಭದ್ರತಾ ಠೇವಣಿಯನ್ನು ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಲಾಲ್‌ಬಾಗ್, ಬೆಂಗಳೂರು–560 004. ರವರ ಹೆಸರಿನಲ್ಲಿ ಪಡೆದು ಲಗತ್ತಿಸಿ ಸಲ್ಲಿಸಬೇಕು. ಮೊಹರಾದ ಟೆಂಡರ್‌ಗಳನ್ನು ದಿನಾಂಕ 16.1.2008 ರಂದು ಮಧ್ಯಾಹ್ನ 3.00 ಗಂಟೆಗೆ ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು ಇಲ್ಲಿ ತೆರೆಯಲಾಗುವುದು. ಹೆಚ್ಚಿನ ವಿವರಗಳಿಗೆ ತೋಟಗಾರಿಕೆ ಅಪರ ನಿರ್ದೇಶಕರು, ತಾಳೆಬೆಳೆ, ಲಾಲ್‌ಬಾಗ್, ಬೆಂಗಳೂರು ಇವರನ್ನು ಸಂಪರ್ಕಿಸುವುದು. (ದೂರವಾಣಿ: 080–26570824 ಈ–ಮೇಲ್:palmolin@vsnl.net.)

ಪಿ.ಆರ್. 793 ತೋಟಗಾರಿಕೆ ನಿರ್ದೇಶಕರು

## ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ
## ಮಾನಸ ಗಂಗೋತ್ರಿ, ಮೈಸೂರು–570 006

**ಅಧಿಸೂಚನೆ ಸಂಖ್ಯೆ:ಕರಾಮುವಿ/ಅವಿ/ಸಿಬ್ಬಂದಿ2/525/2007–08, ದಿನಾಂಕ: 5ನೇ ಡಿಸೆಂಬರ್ 2007**

**ವಿಷಯ:** ಬೋಧಕೇತರ ಹುದ್ದೆಗಳ ನೇಮಕಾತಿ ಬಗೆಗೆ

**ಉಲ್ಲೇಖ:**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 18 ಯುಓವಿ 2006, ದಿನಾಂಕ: 14.08.2006
2. ಸರ್ಕಾರದ ಆದೇಶ ಸಂಖ್ಯೆ: ಇಡಿ 31 ಯುಓವಿ 2006, ದಿನಾಂಕ: 02.01.2007
3. ಸರ್ಕಾರದ ಪತ್ರ ಸಂಖ್ಯೆ: ಇಡಿ 272 ಯುಎನ್‌ಇ 2005, ದಿನಾಂಕ: 03.05.2007
4. ಸರ್ಕಾರದ ಪತ್ರ ಸಂಖ್ಯೆ: ಇಡಿ 22 ಯುಓವಿ 2007, ದಿನಾಂಕ: 10.07.2007

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದಲ್ಲಿ ಖಾಲಿಯಿರುವ ಈ ಕೆಳಕಂಡ ಬೋಧಕೇತರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ 08(ಎಂಟು) ಸೆಟ್‌ಗಳಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ವಿದ್ಯಾರ್ಹತೆ | ಹುದ್ದೆಗಳ ಸಂಖ್ಯೆ | ಮೀಸಲಾತಿ |
|---|---|---|---|---|
| 1 | 2 | 3 | 4 | 5 |
| 1 | ಸಿಸ್ಟಮ್ ಇಂಜಿನಿಯರ್ (18150–26925) | 1. ಕಂಪ್ಯೂಟರ್ ಸೈನ್ಸ್ ವಿಷಯದಲ್ಲಿ ಅಥವಾ ಇಂಜಿನಿಯರಿಂಗ್ / ಅಪ್ಲೈಡ್ ಮ್ಯಾತ್ ಮೆಟಿಕ್ಸ್ ಅಥವಾ ಅಪ್ಲೈಡ್ ಸೈನ್ಸ್ ವಿಷಯದಲ್ಲಿ ಪಿ.ಎಚ್.ಡಿ. ಪದವಿ ಹೊಂದಿ ಕಂಪ್ಯೂಟರ್ ಸಂಬಂಧಿಸಿದ ವಿಷಯದಲ್ಲಿ ವಿಶೇಷ ಪರಿಣಿತಿ ಹೊಂದಿರಬೇಕು.<br>**ಸೂಚನೆ:** ಅಭ್ಯರ್ಥಿಯು ಸಿಸ್ಟಮ್ ಅಪರೇಷನ್ ವಿಷಯದಲ್ಲಿ ಒಳ್ಳೆಯ ಅನುಭವ ಹಾಗೂ ನೈಪುಣ್ಯತೆ ಹೊಂದಿದ್ದಲ್ಲಿ ವಿದ್ಯಾರ್ಹತೆ ಸಡಿಲಿಕೆಗೆ ಅವಕಾಶವಿರುತ್ತದೆ. | 01 | ಸಾಮಾನ್ಯ–1 |

| 1 | 2 | 3 | 4 | 5 |
|---|---|---|---|---|
| | | 2. ಸಿಸ್ಟಮ್ ಪ್ರೋಗ್ರಾಮಿಂಗ್, ಸಿಸ್ಟಮ್ ಡಿಸೈನ್, ಮಾಡಿಫಿಕೇಷನ್‌ನಲ್ಲಿ ಕನಿಷ್ಠ ನಾಲ್ಕು ವರ್ಷಗಳ ಅನುಭವ ಹೊಂದಿ, ಲಾರ್ಜ್ ಕಂಪ್ಯೂಟಿಂಗ್ ಸಿಸ್ಟಮ್‌ನಲ್ಲಿ ಸಿಸ್ಟಮ್ ಡಿಸೈನ್ ಅಥವಾ ಮಾಡಿಫಿಕೇಷನ್ ವಿಷಯದಲ್ಲಿ ತಂಡವನ್ನು ಮುನ್ನಡೆಸುವ ಅನುಭವ ಹೊಂದಿರಬೇಕು. | | |
| 2 | ಕಂಪ್ಯೂಟರ್ ಪ್ರೋಗ್ರಾಮರ್ (10800–20025) | 1. ಕನಿಷ್ಠ ಇಂಜಿನಿಯರಿಂಗ್ ಅಥವಾ ಅಪ್ಲೈಡ್ ಸೈನ್ಸ್ ಅಥವಾ ಗಣಿತಶಾಸ್ತ್ರದಲ್ಲಿ ಸ್ನಾತಕ ಪದವಿ ಹೊಂದಿರಬೇಕು.<br>2. ಲಾರ್ಜ್ ಕಂಪ್ಯೂಟಿಂಗ್ ಸಿಸ್ಟಮ್‌ನಲ್ಲಿ ಸಿಸ್ಟಮ್ ಪ್ರೋಗ್ರಾಮ್ ಬಗ್ಗೆ ಕನಿಷ್ಠ ಮೂರು ವರ್ಷಗಳ ಅನುಭವ ಹೊಂದಿರಬೇಕು. | 02 | ಪಜಾ–1, ಸಾಮಾನ್ಯ–1 |
| 3 | ಪ್ರಥಮ ದರ್ಜೆ ಗುಮಾಸ್ತರು (8000–14800) | 1. ಮಾನ್ಯತೆ ಪಡೆದ ವಿಶ್ವವಿದ್ಯಾನಿಲಯದಿಂದ ಯಾವುದಾದರೊಂದು ಸ್ನಾತಕ ಪದವಿ ಪಡೆದಿರಬೇಕು.<br>2. ಕಂಪ್ಯೂಟರ್ ಬಗ್ಗೆ ಕನಿಷ್ಠ ವಿದ್ಯಾರ್ಹತೆ ಹಾಗೂ ಆಫೀಸ್ ಆಟೋಮೇಷನ್ ಟೂಲ್ಸ್‌ನಲ್ಲಿ ಕಾರ್ಯನಿರತ ಅನುಭವ ಹೊಂದಿರುವ ಬಗ್ಗೆ ಮಾನ್ಯತೆ ಪಡೆದಿರುವ ಸಂಸ್ಥೆಗಳಿಂದ ಪ್ರಮಾಣ ಪತ್ರ ಹೊಂದಿರುವುದು ಅಪೇಕ್ಷಣೀಯ.<br>3. ಆದಾಗ್ಯೂ, ಕರಾಮುವಿ ನಿಲಯದಲ್ಲಿ ಗುತ್ತಿಗೆ/ದಿನಗೂಲಿ ಆಧಾರದ ಮೇಲೆ ಲಿಟರರಿ ಅಸಿಸ್ಟೆಂಟ್/ಡೇಟಾ ಎಂಟ್ರಿ ಅಪರೇಟರ್ ಆಗಿ ಕನಿಷ್ಠ ಮೂರು ವರ್ಷಗಳ ಸೇವೆ ಸಲ್ಲಿಸಿ ಒಳ್ಳೆಯ ಸೇವಾ ದಾಖಲೆ ಹೊಂದಿರುವವರಿಗೆ ಆದ್ಯತೆ ನೀಡಲಾಗುವುದು.<br>4. ಕಡ್ಡಾಯವಾಗಿ ಪದವಿಯ ಮೂರು ವರ್ಷದ ಅಂಕಪಟ್ಟಿಗಳನ್ನು ತಪ್ಪದೇ ಅರ್ಜಿಯೊಡನೆ ಲಗತ್ತಿಸಬೇಕಾಗಿರುತ್ತದೆ, ಲಗತ್ತಿಸದಿದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. | 24 | ಪಜಾ–4 (ಮಹಿಳೆ–1, ಗ್ರಾಮೀಣ–2, ಇತರೆ–1), ವರ್ಗ–।–1 (ಮಹಿಳೆ), ವರ್ಗ–2ಎ–4 (ಮಹಿಳೆ–1, ಗ್ರಾಮೀಣ–2, ಇತರೆ–1), ವರ್ಗ–2ಬಿ–1 (ಮಹಿಳೆ), ವರ್ಗ–3ಎ–1, ವರ್ಗ–3ಬಿ–1, ಸಾಮಾನ್ಯ–12 (ಮಹಿಳೆ–4, ಗ್ರಾಮೀಣ–3 ಮಾಜಿ ಸೈನಿಕ–1, ಕನ್ನಡ ಮಾಧ್ಯಮ–1, ಯೋಜನಾ ನಿರಾಶ್ರಿತರು–1, ಅಂಗವಿಕಲರು–1, ಇತರೆ–1) |
| 4 | ಎರಡನೇ ದರ್ಜೆ ಗುಮಾಸ್ತರು (5800–10500) | 1. ಮಾನ್ಯತೆ ಪಡೆದ ವಿಶ್ವವಿದ್ಯಾನಿಲಯದಿಂದ ಯಾವುದಾದರೊಂದು ಸ್ನಾತಕ ಪದವಿ ಪಡೆದಿರಬೇಕು ಅಥವಾ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಕನಿಷ್ಠ ಐದು ವರ್ಷಗಳ ಸೇವೆಯನ್ನು ವಿಶ್ವವಿದ್ಯಾನಿಲಯ ಅಥವಾ ಸರ್ಕಾರಿ ಕಛೇರಿಗಳಲ್ಲಿ ದ್ವಿತೀಯ ದರ್ಜೆ ಗುಮಾಸ್ತ / ಲಿಟರರಿ ಅಸಿಸ್ಟೆಂಟ್ ಆಗಿ ಕಾರ್ಯನಿರ್ವಹಿಸಿರುವ ಅನುಭವ ಹೊಂದಿರಬೇಕು.<br>2. ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅಥವಾ ಉನ್ನತ ಪರೀಕ್ಷೆಯಲ್ಲಿ ಕನ್ನಡ ಒಂದು ಭಾಷೆಯನ್ನಾಗಿ ವ್ಯಾಸಂಗ ಮಾಡಿರಬೇಕು ಅಥವಾ ವಿಶ್ವವಿದ್ಯಾನಿಲಯ/ಸರ್ಕಾರವು ನಡೆಸುವ ಕನ್ನಡ ಸರ್ಟಿಫಿಕೇಟ್ ಕೋರ್ಸ್‌ನಲ್ಲಿ ತೇರ್ಗಡೆ ಹೊಂದಿರಬೇಕು.<br>3. ಕಂಪ್ಯೂಟರ್ ಬಗ್ಗೆ ಕನಿಷ್ಠ ವಿದ್ಯಾರ್ಹತೆ ಹಾಗೂ ಆಫೀಸ್ ಆಟೋಮೇಷನ್ ಟೂಲ್ಸ್ ಬಗ್ಗೆ ಕಾರ್ಯನಿರತ ಅನುಭವ ಹೊಂದಿರುವ ಕುರಿತು ಮಾನ್ಯತೆ ಪಡೆದಿರುವ ಸಂಸ್ಥೆಗಳಿಂದ ಪ್ರಮಾಣ ಪತ್ರ ಹೊಂದಿರಬೇಕು.<br>4. ಆದಾಗ್ಯೂ, ಕರಾಮುವಿ ನಿಲಯದಲ್ಲಿ ಗುತ್ತಿಗೆ/ದಿನಗೂಲಿ ಆಧಾರದ ಮೇಲೆ ಲಿಟರರಿ ಅಸಿಸ್ಟೆಂಟ್/ಡೇಟಾ ಎಂಟ್ರಿ ಆಪರೇಟರ್ ಆಗಿ ಕನಿಷ್ಠ ಮೂರು ವರ್ಷಗಳ ಸೇವೆ ಸಲ್ಲಿಸಿ ಒಳ್ಳೆಯ ಸೇವಾ ದಾಖಲೆ ಹೊಂದಿರುವವರಿಗೆ ಆದ್ಯತೆ ನೀಡಲಾಗುವುದು. | 14 | ಪಜಾ–2 (ಮಹಿಳೆ–1, ಗ್ರಾಮೀಣ–1), ಪಪ–1 (ಗ್ರಾಮೀಣ), ವರ್ಗ–।–1, ವರ್ಗ–2ಎ–2 (ಮಹಿಳೆ–1, ಇತರೆ–1) ವರ್ಗ–3ಎ–1 (ಗ್ರಾಮೀಣ), ಸಾಮಾನ್ಯ–7 (ಮಹಿಳೆ–2, ಗ್ರಾಮೀಣ–1, ಕನ್ನಡ ಮಾಧ್ಯಮ–1, ಮಾಜಿ ಸೈನಿಕ–1, ಯೋಜನಾ ನಿರಾಶ್ರಿತರು–1, ಅಂಗವಿಕಲ–1) |

| 1 | 2 | 3 | 4 | 5 |
|---|---|---|---|---|
| | | 5. ವಿಶ್ವವಿದ್ಯಾನಿಲಯ/ಸರ್ಕಾರಿ ಕಛೇರಿಗಳಲ್ಲಿ ಕನಿಷ್ಠ ಐದು ವರ್ಷಗಳ ಸೇವಾ ಅನುಭವ ಹೊಂದಿಲ್ಲದ ಅಭ್ಯರ್ಥಿಗಳು ಕಡ್ಡಾಯವಾಗಿ ಪದವಿಯ ಮೂರು ವರ್ಷದ ಅಂಕಪಟ್ಟಿಗಳನ್ನು ತಪ್ಪದೇ ಅರ್ಜಿಯೊಡನೆ ಲಗತ್ತಿಸಬೇಕಾಗಿರುತ್ತದೆ, ಲಗತ್ತಿಸದಿದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. | | |
| 5. | ಡೇಟಾ ಎಂಟ್ರಿ ಆಪರೇಟರ್ಸ್ (5800–10500) | 1. ಮಾನ್ಯತೆ ಪಡೆದ ವಿಶ್ವವಿದ್ಯಾನಿಲಯದಿಂದ ಯಾವುದಾದರೊಂದು ಪದವಿ ಪಡೆದಿರಬೇಕು ಅಥವಾ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು ಹಾಗೂ ಡಿ.ಇ.ಓ/ಡಿ.ಇ.ಓ ಸಹಾಯಕರಾಗಿ ಕನಿಷ್ಠ ಐದು ವರ್ಷಗಳ ಅನುಭವ ಹೊಂದಿರಬೇಕು.<br>2. ಕಂಪ್ಯೂಟರ್ ಬಗ್ಗೆ ಕನಿಷ್ಠ ವಿದ್ಯಾರ್ಹತೆ ಹಾಗೂ ಆಫೀಸ್ ಆಟೋಮೇಷನ್ ಟೂಲ್ಸ್ ಬಗ್ಗೆ ಕಾರ್ಯನಿರತ ಅನುಭವ ಹೊಂದಿರುವ ಕುರಿತು ಮಾನ್ಯತೆ ಪಡೆದಿರುವ ಸಂಸ್ಥೆಗಳಿಂದ ಪ್ರಮಾಣ ಪತ್ರ ಹೊಂದಿರಬೇಕು.<br>3. ಡೆಸ್ಕ್ ಟಾಪ್ ಪಬ್ಲಿಷಿಂಗ್ ಸಾಫ್ಟ್‌ವೇರ್ (ಡಿ.ಟಿ.ಪಿ)ಬಗ್ಗೆ ಕಾರ್ಯ ನಿರತ ಅನುಭವವಿರಬೇಕು.<br>4. ಕರಾಮುವಿಯು ನಡೆಸುವ ಪೂರ್ವಭಾವಿ ಡಿಟಿಪಿ/ಡಿಇಓ ಪರೀಕ್ಷೆಯಲ್ಲಿ ಅರ್ಹತೆ ಪಡೆಯಬೇಕು<br>5. ಅದಾಗ್ಯೂ, ಕರಾಮುವಿ ನಿಲಯದಲ್ಲಿ ಗುತ್ತಿಗೆ/ದಿನಗೂಲಿ ಆಧಾರದ ಮೇಲೆ ಲಿಟರರಿ ಅಸಿಸ್ಟೆಂಟ್/ಡೇಟಾ ಎಂಟ್ರಿ ಅಪರೇಟರ್ ಆಗಿ ಕನಿಷ್ಠ ಮೂರು ವರ್ಷಗಳ ಸೇವೆ ಸಲ್ಲಿಸಿ ಒಳ್ಳೆಯ ಸೇವಾ ದಾಖಲೆ ಹೊಂದಿರುವವರಿಗೆ ಆದ್ಯತೆ ನೀಡಲಾಗುವುದು.<br>6. ಕಡ್ಡಾಯವಾಗಿ ಪದವಿಯ ಮೂರು ವರ್ಷದ ಅಂಕಪಟ್ಟಿಗಳನ್ನು ತಪ್ಪದೇ ಅರ್ಜಿಯೊಡನೆ ಲಗತ್ತಿಸಬೇಕಾಗಿರುತ್ತದೆ. ಲಗತ್ತಿಸದಿದ್ದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ | 27 (26+1 ಬ್ಯಾಕ್ ಲಾಗ್) | ಪಜಾ–4(ಮಹಿಳೆ–2 ಗ್ರಾಮೀಣ–1, ಇತರೆ–1), ಪಪ–1 (ಮಹಿಳೆ), ವರ್ಗ–1(ಮಹಿಳೆ), ವರ್ಗ–2ಎ–4(ಮಹಿಳೆ–2, ಗ್ರಾಮೀಣ –1, ಇತರೆ–1), ವರ್ಗ–2ಬಿ –2 (ಮಹಿಳೆ–1, ಇತರೆ–1 (ಬ್ಯಾಕ್‌ಲಾಗ್)), ವರ್ಗ 3ಎ – 1(ಮಹಿಳೆ), ವರ್ಗ 3ಬಿ – 1 (ಮಹಿಳೆ), ಸಾಮಾನ್ಯ–13 (ಮಹಿಳೆ–4, ಗ್ರಾಮೀಣ–3, ಮಾಜಿ ಸೈನಿಕ–1, ಕನ್ನಡ ಮಾಧ್ಯಮ–1, ಯೋಜನಾ ನಿರಾಶ್ರಿತರು–1, ಅಂಗವಿಕಲ–1, ಇತರೆ–2) |
| 6. | ವಾಹನ ಚಾಲಕರು (5800–10500) | 1. ಹತ್ತನೇಯ ತರಗತಿಯಲ್ಲಿ ತೇರ್ಗಡೆಯಾಗಿರಬೇಕು ಅಥವಾ ಏಳನೇ ತರಗತಿಯಾಗಿದ್ದಲ್ಲಿ ಕನಿಷ್ಠ ಐದು ವರ್ಷಗಳ ಚಾಲನಾ ಅನುಭವ ಇರುವವರಿಗೆ ಆದ್ಯತೆ<br>2. ಹೆವಿ ಡ್ಯೂಟಿ ವಾಹನಗಳ ಪರವಾನಗಿ ಹೊಂದಿರಬೇಕು ಮತ್ತು ಪ್ರಥಮ ಚಿಕಿತ್ಸೆ ಬಗ್ಗೆ ಮಾನ್ಯತೆ ಪಡೆದ ಸಂಸ್ಥೆಯ ದೃಢೀಕರಣ ಪತ್ರ ಹೊಂದಿರಬೇಕು.<br>3. ಅದಾಗ್ಯೂ, ಕರಾಮುವಿ ನಿಲಯದಲ್ಲಿ ಗುತ್ತಿಗೆ/ದಿನಗೂಲಿ ಆಧಾರದ ಮೇಲೆ ವಾಹನ ಚಾಲಕರಾಗಿ ಕನಿಷ್ಠ ಮೂರು ವರ್ಷಗಳ ಸೇವೆ ಸಲ್ಲಿಸಿ ಒಳ್ಳೆಯ ಸೇವಾ ದಾಖಲೆ ಹೊಂದಿರುವವರಿಗೆ ಆದ್ಯತೆ ನೀಡಲಾಗುವುದು.<br>4. ಐದು ವರ್ಷಗಳ ಚಾಲನಾ ಅನುಭವ ಹೊಂದಿ, ಏಳನೇ ತರಗತಿಯಲ್ಲಿ ಉತ್ತೀರ್ಣ ಹೊಂದಿರುವ ಅಭ್ಯರ್ಥಿಗಳು ಕಡ್ಡಾಯವಾಗಿ ಏಳನೇ ತರಗತಿಯ ಅಂಕಪಟ್ಟಿಯನ್ನು ಅರ್ಜಿಯೊಡನೆ ಲಗತ್ತಿಸಬೇಕು. ಲಗತ್ತಿಸದಿದ್ದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. | 02 | ಸಾಮಾನ್ಯ–1(ಗ್ರಾಮೀಣ) ವರ್ಗ–2ಎ–1 |
| 7. | ಪರಿಚಾರಕರು (5200–8200) | 1. ಏಳನೇ ತರಗತಿಯಲ್ಲಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು. ಕಡ್ಡಾಯವಾಗಿ ಏಳನೇ ತರಗತಿಯ ಅಂಕಪಟ್ಟಿಯನ್ನು ತಪ್ಪದೇ ಅರ್ಜಿಯೊಡನೆ ಲಗತ್ತಿಸಬೇಕಾಗಿರುತ್ತದೆ. ಲಗತ್ತಿಸದಿದ್ದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.<br>2. ಅದಾಗ್ಯೂ, ಕರಾಮುವಿ ನಿಲಯದಲ್ಲಿ ಗುತ್ತಿಗೆ/ದಿನಗೂಲಿ ಆಧಾರದ ಮೇಲೆ ಪರಿಚಾರಕರಾಗಿ ಕನಿಷ್ಠ ಮೂರು ವರ್ಷಗಳ ಸೇವೆ ಸಲ್ಲಿಸಿ ಒಳ್ಳೆಯ ಸೇವಾ ದಾಖಲೆ ಹೊಂದಿರುವವರಿಗೆ ಆದ್ಯತೆ ನೀಡಲಾಗುವುದು. | 07 | ಪಜಾ–1(ಗ್ರಾಮೀಣ) ವರ್ಗ–2ಎ–1(ಮಹಿಳೆ) ವರ್ಗ–3ಎ–1.ವರ್ಗ–3ಬಿ–1 ಸಾಮಾನ್ಯ–3 (ಮಹಿಳೆ–1, ಗ್ರಾಮೀಣ–1, ಇತರೆ–1) |

| 1 | 2 | 3 | 4 | 5 |
|---|---|---|---|---|
| 8 | ಸೇವಕರು (4800–7275) | 1. ನಾಲ್ಕನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು. ಕಡ್ಡಾಯವಾಗಿ ನಾಲ್ಕನೇ ತರಗತಿಯ ಅಂಕಪಟ್ಟಿಯನ್ನು ತಪ್ಪದೇ ಅರ್ಜಿಯೊಡನೆ ಲಗತ್ತಿಸಬೇಕಾಗಿರುತ್ತದೆ. ಲಗತ್ತಿಸದಿದ್ದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.<br>2. ಅದಾಗ್ಯೂ, ಕರಾಮುವಿ ನಿಲಯದಲ್ಲಿ ಗುತ್ತಿಗೆ/ದಿನಗೂಲಿ ಆಧಾರದ ಮೇಲೆ ಅಂತಹ ಹುದ್ದೆಯಲ್ಲಿ ಕನಿಷ್ಟ ಮೂರು ವರ್ಷಗಳ ಸೇವೆ ಸಲ್ಲಿಸಿ ಒಳ್ಳೆಯ ಸೇವಾ ದಾಖಲೆ ಹೊಂದಿರುವವರಿಗೆ ಆದ್ಯತೆ ನೀಡಲಾಗುವುದು. | 08 | ಪಜಾ–1(ಗ್ರಾಮೀಣ), ವರ್ಗ–1–1 (ಮಹಿಳೆ), ವರ್ಗ–2ಎ–1 (ಗ್ರಾಮೀಣ), ವರ್ಗ–2ಬಿ–1(ಮಹಿಳೆ) ಸಾಮಾನ್ಯ–4 (ಮಹಿಳೆ–2, ಗ್ರಾಮೀಣ–1, ಯೋಜನಾ ನಿರಾಶ್ರಿತರು–1) |
| 9 | ಸ್ವೀಪರ್ಸ್ (4800–7275) | 1. ನಾಲ್ಕನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು. ಕಡ್ಡಾಯವಾಗಿ ನಾಲ್ಕನೇ ತರಗತಿಯ ಅಂಕಪಟ್ಟಿಯನ್ನು ತಪ್ಪದೇ ಅರ್ಜಿಯೊಡನೆ ಲಗತ್ತಿಸಬೇಕಾಗಿರುತ್ತದೆ, ಲಗತ್ತಿಸದಿದ್ದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.<br>2. ಅದಾಗ್ಯೂ, ಕರಾಮುವಿ ನಿಲಯದಲ್ಲಿ ಗುತ್ತಿಗೆ/ದಿನಗೂಲಿ ಆಧಾರದ ಮೇಲೆ ಅಂತಹ ಹುದ್ದೆಯಲ್ಲಿ ಕನಿಷ್ಟ ಮೂರು ವರ್ಷಗಳ ಸೇವೆ ಸಲ್ಲಿಸಿ ಒಳ್ಳೆಯ ಸೇವಾ ದಾಖಲೆ ಹೊಂದಿರುವವರಿಗೆ ಆದ್ಯತೆ ನೀಡಲಾಗುವುದು. | 04 | ಪಜಾ–1(ಮಹಿಳೆ), ವರ್ಗ–2ಬಿ–1, ಸಾಮಾನ್ಯ–2 (ಮಹಿಳೆ–1, ಗ್ರಾಮೀಣ–1) |
| 10 | ಸಹಾಯಕರು (4800–7275) | 1. ನಾಲ್ಕನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು. ಕಡ್ಡಾಯವಾಗಿ ನಾಲ್ಕನೇ ತರಗತಿಯ ಅಂಕಪಟ್ಟಿಯನ್ನು ತಪ್ಪದೇ ಅರ್ಜಿಯೊಡನೆ ಲಗತ್ತಿಸಬೇಕಾಗಿರುತ್ತದೆ. ಲಗತ್ತಿಸದಿದ್ದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.<br>2. ಅದಾಗ್ಯೂ, ಕರಾಮುವಿ ನಿಲಯದಲ್ಲಿ ಗುತ್ತಿಗೆ/ದಿನಗೂಲಿ ಆಧಾರದ ಮೇಲೆ ಅಂತಹ ಹುದ್ದೆಯಲ್ಲಿ ಕನಿಷ್ಟ ಮೂರು ವರ್ಷಗಳ ಸೇವೆ ಸಲ್ಲಿಸಿ ಒಳ್ಳೆಯ ಸೇವಾ ದಾಖಲೆ ಹೊಂದಿರುವವರಿಗೆ ಆದ್ಯತೆ ನೀಡಲಾಗುವುದು. | 03 | ವರ್ಗ–I–1, ಸಾಮಾನ್ಯ–2 (ಮಹಿಳೆ–1, ಗ್ರಾಮೀಣ–1) |
| 11 | ಗಾರ್ಡ್‌ನರ್ (4800–7275) | 1. ಹತ್ತನೇ ತರಗತಿಯಲ್ಲಿ ತೇರ್ಗಡೆ ಹೊಂದಿ, ಗಾರ್ಡನಿಂಗ್‌ನಲ್ಲಿ ಕನಿಷ್ಟ ಎರಡು ವರ್ಷಗಳ ಅನುಭವ ಹೊಂದಿರಬೇಕು ಅಥವಾ ಏಳನೇ ತರಗತಿಯಲ್ಲಿ ತೇರ್ಗಡೆ ಹೊಂದಿದ್ದಲ್ಲಿ ಗಾರ್ಡನಿಂಗ್‌ನಲ್ಲಿ ಕನಿಷ್ಟ ಐದು ವರ್ಷಗಳ ಅನುಭವ ಹೊಂದಿರಬೇಕು.<br>2. ಅದಾಗ್ಯೂ, ಕರಾಮುವಿ ನಿಲಯದಲ್ಲಿ ಗುತ್ತಿಗೆ/ದಿನಗೂಲಿ ಆಧಾರದ ಮೇಲೆ ಅಂತಹ ಹುದ್ದೆಯಲ್ಲಿ ಕನಿಷ್ಟ ಮೂರು ವರ್ಷಗಳ ಸೇವೆ ಸಲ್ಲಿಸಿ ಒಳ್ಳೆಯ ಸೇವಾ ದಾಖಲೆ ಹೊಂದಿರುವವರಿಗೆ ಆದ್ಯತೆ ನೀಡಲಾಗುವುದು.<br>3. ಐದು ವರ್ಷಗಳ ಅನುಭವ ಹೊಂದಿ, ಏಳನೇ ತರಗತಿಯಲ್ಲಿ ಉತ್ತೀರ್ಣರಾಗಿರುವ ಅಭ್ಯರ್ಥಿಗಳು ಕಡ್ಡಾಯವಾಗಿ ಏಳನೇ ತರಗತಿಯ ಅಂಕಪಟ್ಟಿಯನ್ನು ಅರ್ಜಿಯೊಡನೆ ಲಗತ್ತಿಸಬೇಕು. ಲಗತ್ತಿಸದಿದ್ದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. | 05 | ಪಜಾ–1 ಪಪ–1, ವರ್ಗ–I–1 ಸಾಮಾನ್ಯ–2 (ಮಹಿಳೆ–1. ಇತರೆ–1) |
| 12 | ಗ್ಯಾಂಗ್‌ಮನ್ (5200–8200) | 1. ಹತ್ತನೇಯ ತರಗತಿ ಅಥವಾ ಏಳನೇ ತರಗತಿಯಲ್ಲಿ ತೇರ್ಗಡೆ ಹೊಂದಿ, ಗ್ಯಾಂಗ್‌ಮನ್ ಕೆಲಸ/ಕಾರ್ಯದಲ್ಲಿ ಐದು ವರ್ಷಗಳ ಅನುಭವ ಹೊಂದಿರಬೇಕು<br>2. ಆದಾಗ್ಯೂ, ಕರಾಮುವಿ ನಿಲಯದಲ್ಲಿ ಗುತ್ತಿಗೆ/ದಿನಗೂಲಿ ಆಧಾರದ ಮೇಲೆ ಅಂತಹ ಹುದ್ದೆಯಲ್ಲಿ ಕನಿಷ್ಟ ಮೂರು ವರ್ಷಗಳ ಸೇವೆ ಸಲ್ಲಿಸಿ ಒಳ್ಳೆಯ ಸೇವಾ ದಾಖಲೆ ಹೊಂದಿರುವವರಿಗೆ ಆದ್ಯತೆ ನೀಡಲಾಗುವುದು.<br>3. ಐದು ವರ್ಷಗಳ ಅನುಭವ ಹೊಂದಿ ಏಳನೇ ತರಗತಿಯಲ್ಲಿ ಉತ್ತೀರ್ಣರಾಗಿರುವ ಅಭ್ಯರ್ಥಿಗಳು ಕಡ್ಡಾಯವಾಗಿ ಏಳನೇ ತರಗತಿಯ ಅಂಕಪಟ್ಟಿಯನ್ನು ಅರ್ಜಿಯೊಡನೆ ಲಗತ್ತಿಸಬೇಕು. ಲಗತ್ತಿಸದಿದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. | 02 | ಪ.ಜಾ–1, ಸಾಮಾನ್ಯ–1 |

**ಸಂಕ್ಷಿಪ್ತ ವಿವರಣೆ ಸಾಮಾನ್ಯ:–** ಸಾಮಾನ್ಯ ವರ್ಗ, ಪ.ಜಾ – ಪರಿಶಿಷ್ಟ ಜಾತಿ, ಪ.ಪ. – ಪರಿಶಿಷ್ಟ ಪಂಗಡ, ವರ್ಗ – 1 – ವರ್ಗ 1, ವರ್ಗ – 2ಎ – ವರ್ಗ – 2ಎ, ವರ್ಗ – 2ಬಿ – ವರ್ಗ 2ಬಿ, ವರ್ಗ 3ಎ, ವರ್ಗ – 3ಎ ವರ್ಗ – 3ಬಿ – ವರ್ಗ 3ಬಿ, ಗ್ರಾಮೀಣ – ಗ್ರಾಮೀಣ ಅಭ್ಯರ್ಥಿ, ಮಾ.ಸೈ – ಮಾಜಿ ಸೈನಿಕ ಅಭ್ಯರ್ಥಿ, ಕ.ಮಾ. – ಕನ್ನಡ ಮಾಧ್ಯಮ ಅಭ್ಯರ್ಥಿ, ಯೋ.ನಿ – ಯೋಜನಾ ನಿರಾಶ್ರಿತರು, ಅಂ.ವಿ – ಅಂಗವಿಕಲ ಅಭ್ಯರ್ಥಿ.

02. **ಆಯ್ಕೆ ವಿಧಾನ:** ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯವು ಆಯಾ ಹುದ್ದೆಗಳಿಗೆ ನಿಗದಿಪಡಿಸಿರುವ ವಿದ್ಯಾರ್ಹತೆಗಳಲ್ಲಿ ಗಳಿಸಿದ ಅಂಕಗಳ ಜ್ಯೇಷ್ಠತೆ ಹಾಗೂ ಅಭ್ಯರ್ಥಿಗಳ ಸಾಮಾನ್ಯ ಹಾಗೂ ತಾಂತ್ರಿಕ ಜ್ಞಾನ ಹಾಗೂ ಸಾಮರ್ಥ್ಯಕ್ಕನುಗುಣವಾಗಿ ಕರಾಮುವಿ ನಿಲಯದ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಅಭ್ಯರ್ಥಿಗಳನ್ನು ಸಂದರ್ಶನದ ಮೂಲಕ ನೇರ ಆಯ್ಕೆ ಮಾಡಲಾಗುವುದು.

03. **ವಯೋಮಿತಿ:** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

| | | | |
|---|---|---|---|
| **(ಅ) ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರಬೇಕು.** | **(ಆ) ಗರಿಷ್ಠ ವಯೋಮಿತಿ : (i) ಸಾಮಾನ್ಯ ವರ್ಗ – 33 ವರ್ಷ** | **(ii) ಇತರೆ ಹಿಂದುಳಿದ ವರ್ಗ – 36 ವರ್ಷ** | **ಪ.ಜಾ/ಪ.ಪಂ/ಪ್ರವರ್ಗ – 1 – 38 ವರ್ಷ** |

ಈ ಮುಂದಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಈ ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.

1. ಅಭ್ಯರ್ಥಿಯು ಕೇಂದ್ರ / ರಾಜ್ಯ ಸರ್ಕಾರದ ಅಥವಾ ಸರ್ಕಾರದ ಸ್ವಾಮ್ಯ / ನಿಯಂತ್ರಣದಲ್ಲಿರುವ ಸ್ಥಳೀಯ ಪ್ರಾಧಿಕಾರದಲ್ಲಿ / ನಿಗಮಗಳಲ್ಲಿ ಹುದ್ದೆ ಹೊಂದಿರುವ/ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ/ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 5 (ಐದು) ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.
2. ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳು.
3. ಅಭ್ಯರ್ಥಿಯು ನ್ಯಾಷನಲ್ ಕೆಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣಕಾಲದ ಪರೀವಿಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂಥ ಕ್ಯಾಡೆಟ್ ಪರಿವೀಕ್ಷಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.
4. ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು.
5. ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು.
6. ಅಭ್ಯರ್ಥಿಯು ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದಲ್ಲಿ ಯಾವುದೇ ಹುದ್ದೆಯಲ್ಲಿ ತಾತ್ಕಾಲಿಕವಾಗಿ ದಿನಗೂಲಿ / ಕಾಂಟ್ರಾಕ್ಟ್ ಆಧಾರದ (On contract basis) ಮೇಲೆ ಎಷ್ಟು ವರ್ಷ ಸೇವೆ ಸಲ್ಲಿಸಿರುವರೋ ಅಷ್ಟು ವರ್ಷಗಳು.
7. ಅಭ್ಯರ್ಥಿಯು ಮಹಿಳೆಯಾಗಿದ್ದಲ್ಲಿ 5 ವರ್ಷಗಳು.

04. **ಜಾತಿ ಮೀಸಲಾತಿ ಕೋರಿ ಬಯಸುವ ಅಭ್ಯರ್ಥಿಗಳು**

| | | |
|---|---|---|
| ಪ.ಜಾ/ಪ.ಪಂ ವರ್ಗಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ 'ಡಿ' ನಲ್ಲಿಯೂ | ಪ್ರವರ್ಗ –1ರ ವರ್ಗಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ 'ಇ' ನಲ್ಲಿಯೂ | 2 ಎ, 2 ಬಿ, 3 ಎ, 3 ಬಿ ವರ್ಗಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ 'ಎಫ್' ನಲ್ಲಿಯೂ ಪ್ರಮಾಣ ಪತ್ರಗಳನ್ನು ಸಲ್ಲಿಸಬೇಕು. |

- ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯ 1 ರಿಂದ 10ನೇ ತರಗತಿಯವರಿಗೆ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಈ ಪ್ರಮಾಣ ಪತ್ರಗಳ ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಸಿಂಧುವಾದದ್ದು ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸತಕ್ಕದ್ದು. ಗ್ರಾಮೀಣ ಮೀಸಲಾತಿಗೆ ಸಂಬಂಧಿಸಿದಂತೆ ನಮೂನೆ–2 ರಲ್ಲಿಯು ಪ್ರಮಾಣ ಪತ್ರವನ್ನು ಅಭ್ಯರ್ಥಿಗಳು ತಾವು ವ್ಯಾಸಂಗ ಮಾಡಿದ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಅದಕ್ಕೆ ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಪಡೆದಿರತಕ್ಕದ್ದು. ಅಭ್ಯರ್ಥಿಗಳು ಮೂಲದಾಖಲೆಗಳ ಪರಿಶೀಲನೆಗಾಗಿ ವಿ.ವಿ.ನಿಲಯವು ಸೂಚನೆ ನೀಡಿದಾಗ ಸಲ್ಲಿಸತಕ್ಕದ್ದು.
- ಅಂಗವಿಕಲ ಅಭ್ಯರ್ಥಿ – ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ:ಸಿಆಸುಇ 115 ಸೆನೆನಿ 2005, ದಿನಾಂಕ:19.11.2005ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪಡೆದ ಪ್ರಮಾಣ ಪತ್ರದ ಒಂದು ಫೋಟೋ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸಲು ಬರುವುದಿಲ್ಲ.
- ಕನ್ನಡ ಮಾಧ್ಯಮದ ಅಭ್ಯರ್ಥಿ – ಕನ್ನಡ ಮಾಧ್ಯಮದ ಅಭ್ಯರ್ಥಿಗಳೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧ ಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಪಡೆದ ಪ್ರಮಾಣ ಪತ್ರದ ಒಂದು ಫೋಟೋ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.
- ಯೋಜನೆಗಳಿಂದ ನಿರಾಶ್ರಿತ ಅಭ್ಯರ್ಥಿ – ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್‌ರವರು ನೀಡಿದ ಪ್ರಮಾಣ ಪತ್ರದ ಒಂದು ಫೋಟೋ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

**ಸಾಮಾನ್ಯ ಮಾಹಿತಿಗಳು ಮತ್ತು ಸೂಚನೆಗಳು:**

01 ನಿಗದಿತ ಅರ್ಜಿ ನಮೂನೆಗಳನ್ನು ಕುಲಸಚಿವರು, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು–6 ಇವರಿಂದ ಈ ಕೆಳಕಂಡಂತೆ ಶುಲ್ಕವನ್ನು ಡಿಡಿ ಯ ಮೂಲಕ 'ಹಣಕಾಸು ಅಧಿಕಾರಿಗಳು, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು' ಇವರ ಹೆಸರಿಗೆ ಪಾವತಿಸಿ ಪಡೆಯಬಹುದಾಗಿದೆ. ಅರ್ಜಿ ಶುಲ್ಕದ ವಿವರ ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಹುದ್ದೆಯ ವಿವರ | ಅರ್ಜಿ ಪಡೆಯಲು ಪಾವತಿಸಬೇಕಾದ ಶುಲ್ಕ | ಅಂಚೆಯ ಮೂಲಕ ಪಡೆಯಲು ಪಾವತಿಸಬೇಕಾದ ಹೆಚ್ಚಿನ ಶುಲ್ಕ | ಭರ್ತಿ ಮಾಡಿದ ಅರ್ಜಿಯ ಜೊತೆ ಸಲ್ಲಿಸಬೇಕಾದ ಶುಲ್ಕ |
|---|---|---|---|---|
| 01 | ಕ್ರಮ ಸಂಖ್ಯೆ 1 ರಿಂದ 12ರ ವರೆಗಿನ ಹುದ್ದೆಗಳಿಗೆ | ರೂ. 200/– | ರೂ. 50/– | ರೂ. 400/– |

1. ನಿಗದಿತ ಅರ್ಜಿ ಶುಲ್ಕ ಪಾವತಿಸಿದ ಡಿ.ಡಿ.ಯನ್ನು ತೋರಿಸಿದಲ್ಲಿ / ಹಾಜರುಪಡಿಸಿದಲ್ಲಿ ಅರ್ಜಿಗಳನ್ನು ನೇರವಾಗಿ / ಅಂಚೆಯ ಮೂಲಕ ಕಳುಹಿಸಲಾಗುವುದು.

2. ಅರ್ಜಿಗಳನ್ನು ಅಂಚೆಯ ಮೂಲಕ ಪಡೆಯಬಯಸುವವರು 6'' x 12'' ಅಳತೆಯ ಸ್ವವಿಳಾಸ ಹೊಂದಿದ ಲಕೋಟೆಯೊಂದಿಗೆ 'ಹಣಕಾಸು ಅಧಿಕಾರಿಗಳು, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು' ಇವರ ಹೆಸರಿಗೆ ಪಡೆದುಕೊಂಡ ಡಿ.ಡಿ.ಯನ್ನು ಸಹ, ಕುಲಸಚಿವರು, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು–6, ಇವರಿಗೆ ಕಳುಹಿಸಬೇಕು.
3. ಪಜಾ/ ಪಪ ಮತ್ತು ಪ್ರ ವರ್ಗ – 1 ಅಭ್ಯರ್ಥಿಗಳು ಮೇಲೆ ನಿಗದಿಪಡಿಸಿದ ಶುಲ್ಕದಲ್ಲಿ ನಾಲ್ಕನೇ ಒಂದು ಭಾಗವನ್ನು ಮಾತ್ರ ಪಾವತಿಸಬೇಕಾಗಿರುತ್ತದೆ. (ಈ ಬಗ್ಗೆ ಇತ್ತೀಚಿನ ದೃಢೀಕರಣ ಪತ್ರವನ್ನು ಲಗತ್ತಿಸಬೇಕು). ಅಂಚೆಯ ಮೂಲಕ ಅರ್ಜಿ ಪಡೆಯುವ ಯಾವುದೇ ಅಭ್ಯರ್ಥಿಯು ಅಂಚೆ ವೆಚ್ಚವಾದ ರೂ.50/–ಅನ್ನು ಪಾವತಿಸಬೇಕಾಗಿರುತ್ತದೆ. ಇದರಲ್ಲಿ ಯಾವುದೇ ಅಭ್ಯರ್ಥಿಗೂ ವಿನಾಯಿತಿ ಇರುವುದಿಲ್ಲ.
4. ಎಂಟು ಸೆಟ್‌ಗಳಲ್ಲಿ ಸಲ್ಲಿಸಿದ ಅರ್ಜಿಗಳು ಹಾಗೂ ಅವುಗಳಿಗೆ ಲಗತ್ತಿಸಿದ ವಿದ್ಯಾರ್ಹತೆ ಹಾಗೂ ಇತರೆ ದಾಖಲಾತಿಗಳ ಜೆರಾಕ್ಸ್ ಪ್ರತಿಗಳನ್ನು ಹಿಂತಿರುಗಿಸಲಾಗುವುದಿಲ್ಲ.
5. ಪ್ರತ್ಯೇಕ ಹುದ್ದೆಗಳಿಗೆ ಬೇರೆ ಬೇರೆ ಅರ್ಜಿಗಳನ್ನು ಸಲ್ಲಿಸಬೇಕು.
6. ಅಭ್ಯರ್ಥಿಗಳು ಸಂದರ್ಶನಕ್ಕೆ ಹಾಜರಾಗುವುದು ಹಾಗೂ ಸೇವೆಗೆ ಸೇರಿಕೊಳ್ಳುವ ಸಮಯ ಅಥವಾ ಇನ್ಯಾವುದೇ ಸಂದರ್ಭದಲ್ಲಾದರೂ ವಿ.ವಿ.ವತಿಯಿಂದ ಯಾವುದೇ ರೀತಿಯ ಟಿ.ಎ / ಡಿ.ಎ / ಅಥವಾ ಇನ್ಯಾವುದೇ ಭತ್ಯೆಗಳನ್ನು ನೀಡಲಾಗುವುದಿಲ್ಲ.
7. ಅಭ್ಯರ್ಥಿಗಳು 8 (ಎಂಟು) ಸೆಟ್‌ಗಳಲ್ಲಿ ಅರ್ಜಿಗಳನ್ನು ಸಲ್ಲಿಸಬೇಕು. ಅರ್ಜಿಗಳನ್ನು ಬಹಳ ಎಚ್ಚರಿಕೆಯಿಂದ ಭರ್ತಿಮಾಡಬೇಕು. ಎಂಟು ಸೆಟ್‌ಗಳಲ್ಲಿ ಸಲ್ಲಿಸದಿರುವ ಅರ್ಜಿಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸಲಾಗುವುದು.
8. ಅರ್ಜಿಗಳನ್ನು ದಿನಾಂಕ:05.01.2008 ರವರೆಗೆ ನೀಡಲಾಗುವುದು. ಕುಲಸಚಿವರು, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು–6, ಇವರಿಗೆ ಯಥಾವತ್ ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ: 07.01.2008 ರಂದು ಮಧ್ಯಾಹ್ನ 4.00 ಗಂಟೆಗಳ ಒಳಗೆ ತಲುಪುವಂತೆ ಕಳುಹಿಸಬೇಕು.
9. ಉದ್ಯೋಗದಲ್ಲಿರುವವರು ಅರ್ಜಿಗಳನ್ನು ತಮ್ಮ ಉದ್ಯೋಗದಾತರ ಮೂಲಕ ನಿಗದಿತ ಅಂತಿಮ ದಿನಾಂಕದಂದು ಅಥವಾ ಅದಕ್ಕೂ ಮುನ್ನ ಕಳಿಸಬೇಕು.
10. ಪ್ರಮಾಣ ಪತ್ರಗಳ ಪ್ರತಿಗಳು ಮತ್ತು ಸಂಬಂಧಿತ ದಾಖಲೆಗಳಿಲ್ಲದೇ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
11. ಮೀಸಲಾತಿಯ ಸೌಲಭ್ಯವನ್ನು ಪಡೆಯಬಯಸುವ ಅಭ್ಯರ್ಥಿಗಳು ತಹಸೀಲ್ದಾರರ ಹುದ್ದೆಗೆ ಕಡಿಮೆ ಇಲ್ಲದ ಸಕ್ಷಮ ಪ್ರಾಧಿಕಾರಿಗಳಿಂದ ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರ ಪಡೆದು ಲಗತ್ತಿಸಬೇಕು.
12. ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ ವ್ಯಾಪ್ತಿಯಲ್ಲಿ ಎಲ್ಲಿಯಾದರೂ ಸೇವೆ ಸಲ್ಲಿಸಲು ಸಿದ್ಧರಾಗಿರಬೇಕು.
13. ಆಯ್ಕೆಯಾದ ಅಭ್ಯರ್ಥಿಗಳು ಎರಡು ವರ್ಷಗಳ ಪ್ರೊಬೇಷನರಿ ಅವಧಿಯಲ್ಲಿರುತ್ತಾರೆ.
14. ಜಾಹೀರಾತು ಮಾಡಿದ ಹುದ್ದೆಗಳನ್ನು ಭರ್ತಿ ಮಾಡುವ ಅಥವಾ ಮಾಡದಿರುವ ಅಧಿಕಾರವನ್ನು ವಿಶ್ವವಿದ್ಯಾನಿಲಯವು ಕಾಯ್ದಿರಿಸಿಕೊಂಡಿರುತ್ತದೆ.
15. ನೇರ ಅಥವಾ ಪರೋಕ್ಷ ಸ್ವರೂಪದ ಶಿಫಾರಸ್ಸುಗಳ ಅಭ್ಯರ್ಥಿಯನ್ನು ಅನರ್ಹಗೊಳಿಸಲಾಗುತ್ತದೆ.
16. ಅಭ್ಯರ್ಥಿಯ ಅರ್ಹತೆ, ಜೇಷ್ಠತೆ ಮೀಸಲಾತಿ ಇತ್ಯಾದಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರವೇ ಸಂಬಂಧಿತ ಅರ್ಹ ಅಭ್ಯರ್ಥಿಗಳ ಹೆಸರುಗಳನ್ನು ಅರ್ಹತೆ ಪಟ್ಟಿಗೆ (Eligibility list) ಸೇರಿಸಲಾಗುವುದು. ಈ ಬಗ್ಗೆ ವಿ.ವಿ.ನಿಲಯದ ತೀರ್ಮಾನವೇ ಅಂತಿಮವಾಗಿರುತ್ತದೆ.
17. ಹುದ್ದೆಯ ನೇಮಕಾತಿಗೆ ಹೊರಡಿಸಿರುವ ಅಧಿಸೂಚನೆಯ ದಿನಾಂಕದಂದು ಅಭ್ಯರ್ಥಿಗಳು ಹುದ್ದೆಗೆ ನಿಗದಿಪಡಿಸಿರುವ ಶೈಕ್ಷಣಿಕ ವಿದ್ಯಾರ್ಹತೆಯನ್ನು ಹೊಂದಿರಬೇಕು.
18. ಕೇಳಿರುವ ದಾಖಲಾತಿಗಳನ್ನು ನೀಡದ ಅಥವಾ ಅಪೂರ್ಣ ಅರ್ಜಿಗಳನ್ನು ಯಾವುದೇ ಕಾರಣ ನೀಡದೆ ಹಾಗೂ ಈ ಬಗ್ಗೆ ವಿ.ವಿ.ನಿಲಯವು ಯಾವುದೇ ಪತ್ರ ವ್ಯವಹಾರ ಮಾಡದೇ ಅರ್ಜಿಯನ್ನು ತಿರಸ್ಕರಿಸಲಾಗುವುದು.
19. ನಿಗದಿತ ವಿದ್ಯಾರ್ಹತೆಯನ್ನು ಹೊಂದಿದ ಮಾತ್ರಕ್ಕೆ ಸಂದರ್ಶನಕ್ಕೆ ಕರೆಯಲಾಗುವುದೆಂದು ಭಾವಿಸಬಾರದು.
20. ಸಂದರ್ಶನಕ್ಕೆ ಕರೆಯುವ ಅಭ್ಯರ್ಥಿಗಳ ಅರ್ಹತೆಯನ್ನು ವಿಶ್ವವಿದ್ಯಾನಿಲಯದ ಸ್ಕ್ರೀನಿಂಗ್ ಕಮಿಟಿಯು ನಿರ್ಧರಿಸುತ್ತದೆ.
21. ನಿಗದಿಪಡಿಸಿದಂತೆ ಪಾವತಿಸುವ ಶುಲ್ಕವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.
22. ಅರ್ಜಿದಾರರು ಅಂತಿಮ ದಿನಾಂಕದ ವರೆಗೆ ಕಾಯದೇ ಆದಷ್ಟು ಮುಂಚಿತವಾಗಿ ಅರ್ಜಿಗಳನ್ನು ಕಳುಹಿಸಬೇಕು. ಅಂಚೆಯಿಂದ ಉಂಟಾಗಬಹುದಾದ ವಿಳಂಬಗಳಿಗೆ ವಿಶ್ವವಿದ್ಯಾನಿಲಯವು ಜವಾಬ್ದಾರವಲ್ಲ.

ಆದೇಶದ ಮೇರೆಗೆ
ಕುಲಸಚಿವ

ಪಿ.ಡಿ. 112

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ**
**ಸರ್ಕಾರಿ ಮುದ್ರಣಾಲಯ, ನಂ. 6/ಇ, 1ನೇ ಅಡ್ಡರಸ್ತೆ, ಕೆ.ಐ.ಎ.ಡಿ.ಬಿ. ಪೀಣ್ಯ 1ನೇ ಹಂತ, ತುಮಕೂರು ರಸ್ತೆ, ಬೆಂಗಳೂರು–560 058**

**ಪ್ರಕಟಣೆ ಪ.ಸಂ. LTR No. ಡಿಪಿಎಸ್:ಖರೀದಿ:ಸಿ–15:2007–08, ದಿನಾಂಕ: 27ನೇ ಡಿಸೆಂಬರ್ 2007**

ಟೆಂಡರ್ ಅಧಿಸೂಚನೆ ಸಂಖ್ಯೆ ಡಿಪಿಎಸ್:ಪಿಯುಆರ್: ಸಿ–15 2007–08 ದಿನಾಂಕ 22–11–2007ಕ್ಕೆ ಸಂಬಂಧಿಸಿದಂತೆ ಟೆಂಡರ್ ಸಲ್ಲಿಸುವ ಅಂತಿಮ ದಿನಾಂಕವನ್ನು ದಿನಾಂಕ1–1–2008 ರ ವರೆಗೆ ಮುಂದೂಡಲಾಗಿದ್ದು ಪುನರ್ ನಿಗಧಿಪಡಿಸಲಾದ ದಿನಾಂಕಗಳು ಈ ಕೆಳಗಿನಂತಿರುತದೆ.

ಟೆಂಡರ್ ದಸ್ತಾವೇಜು ಖರೀದಿಸಲು ಕೊನೆಯ ದಿನಾಂಕ 5–01–2008

ಟೆಂಡರ್ ಸಲ್ಲಿಸುವ ಕೊನೆಯ ದಿನಾಂಕ ಹಾಗೂ ವೇಳೆ 07–01–2008 ಮಧ್ಯಾಹ್ನ 3.00 ಗಂಟೆ

ತಾಂತ್ರಿಕ ಅಹವಾಲು ತೆರೆಯುವ ದಿನಾಂಕ ಹಾಗೂ ವೇಳೆ 07–01–2008 ರಂದು ಮಧ್ಯಾಹ್ನ 3.30 ಕ್ಕೆ

ಆರ್ಥಿಕ ಅಹವಾಲು ತೆರೆಯುವ ದಿನಾಂಕ ಹಾಗೂ ವೇಳೆ 10–01–2008 ರಂದು ಮಧ್ಯಾಹ್ನ 3.30 ಕ್ಕೆ

ಪಿ.ಆರ್. 803 ನಿರ್ದೇಶಕರು